



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 80

| ಸಂಪುಟ: ೧೦ ಸಂಚಿಕೆ: ೦೩ | ಜೂನ್ ೨೦೨೨ | ಪುಟಗಳು ೮ | ವಾರ್ಷಿಕ ಚಂದಾ ರೂ. | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 10 Issue: 03 | June 2022 | Pages - 8 | ೨೦/- | Editor : Sri. B.R. Ravindranath |

ಶ್ರೀ ಶಕ ೧೯೪೫ ಶುಭಕೃತ ನಾಮ ಸಂವತ್ಸರ ಉತ್ತರಾಯಣ – ಗ್ರೀಷ್ಮ ಋತು ಚಾಂದ್ರಮಾನ ಜ್ಯೇಷ್ಠ –ಆಷಾಢ ಮಾಸ ಸೌರಮಾನ ವೃಷಭ–ಮಿಥುನ




೦೧.೦೫.೨೦೨೨

## ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ' ಮತ್ತು 'ಡಾ. ವಿಜಯಾ ಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿ' ಪ್ರದಾನ ಸಮಾರಂಭ



೦೧-೦೫-೨೦೨೨ರ ಭಾನುವಾರ ಸಂಜೆ ೫.೦೦ ಗಂಟೆಗೆ ಸೂ.ವೆಂ. ಆರಗ ವಿಮರ್ಶಾ ಪ್ರಶಸ್ತಿ ಮತ್ತು ಡಾ. ವಿಜಯಾ ಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಆಯೋಜಿಸಲಾಗಿತ್ತು. ೨೦೨೧ನೇ ಸಾಲಿನ ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿಯನ್ನು ನಾಡಿನ ಪ್ರಸಿದ್ಧ ಕಥೆಗಾರರೂ, ಕಾದಂಬರಿಕಾರರೂ, ವಿಮರ್ಶಕರೂ ಆದ ಶ್ರೀ ಕೆ.ಸತ್ಯನಾರಾಯಣ ಅವರ 'ಅವರವರ ಭವಕ್ಕೆ ಓದುಗರ ಭಕುತಿಗೆ, ಕೃತಿಗೆ' ನೀಡಲಾಯಿತು. ೨೦೨೨ನೇ ಸಾಲಿನ ಡಾ. ವಿಜಯಾ ಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿಯನ್ನು ಪ್ರಾಧ್ಯಾಪಕರೂ, ಸಾಹಿತಿಗಳೂ, ಸಂಶೋಧಕರೂ, ವಿಮರ್ಶಕರೂ ಆದ ಧಾರವಾಡದ ಡಾ. ಶಾಂತಾ ಇಮ್ರಾಪುರ ಅವರಿಗೆ ನೀಡಲಾಯಿತು. ಎರಡೂ ಪ್ರಶಸ್ತಿಗಳನ್ನು ಪ್ರದಾನ ಮಾಡಲು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಅಗ್ರಹಾರ ಕೃಷ್ಣಮೂರ್ತಿಯವರು ಪ್ರಶಸ್ತಿ ಪ್ರದಾನ ಮಾಡಿ ಮಾತನಾಡುತ್ತಾ ಆತ್ಮಕಥನಗಳ ಮಹತ್ವ, ವೈಶಿಷ್ಟ್ಯ ಮತ್ತು ಕೆ. ಸತ್ಯನಾರಾಯಣ ಅವರ ಕೃತಿಯ ಆಂತರ್ಯವನ್ನು ವಿವರಿಸಿದರು. ಡಾ.ಶಾಂತಾ ಇಮ್ರಾಪುರ ಅವರ ಸಾಹಿತ್ಯ ಕೃಷಿಯನ್ನು ಉಲ್ಲೇಖಿಸಿ ಅರ್ಹರಿಗೆ ಸಂದ ಪ್ರಶಸ್ತಿಗಳಿವು ಎಂದು ತೃಪ್ತಿಯನ್ನು ವ್ಯಕ್ತಪಡಿಸಿದರು.

ಪ್ರಶಸ್ತಿ ಪುರಸ್ಕೃತರಾದ ಶ್ರೀ ಕೆ. ಸತ್ಯನಾರಾಯಣ ಅವರು ತಾವು ವಿಮರ್ಶಾ ಸಾಹಿತ್ಯ ರಚನೆಗೆ ತೊಡಗಿದ ಹಿನ್ನೆಲೆಯನ್ನು ತಿಳಿಸಿ, ತಮ್ಮನ್ನು ಗುರುತಿಸಿದ್ದಕ್ಕಾಗಿ ವಂದನೆಗಳನ್ನು ಅರ್ಪಿಸಿದರು. ಡಾ.ಶಾಂತಾ ಇಮ್ರಾಪುರ ಅವರು ಮಹಿಳಾ ಸಾಹಿತ್ಯದ ಚರಿತ್ರೆಯ ಗಮನ ಸೆಳೆದು ಇಂದಿಗೂ ಸ್ತ್ರೀಯರಿಗೆ ಲಭ್ಯವಾಗದಿರುವ ಅವಕಾಶಗಳನ್ನು ಉಲ್ಲೇಖಿಸಿ, ಇಂತಹ ಪ್ರಶಸ್ತಿಯನ್ನು ಸ್ಥಾಪಿಸಿ ಮಹಿಳೆಯರನ್ನು ಗುರುತಿಸುವ ಕೆಲಸ ಪ್ರೋತ್ಸಾಹದಾಯಕವಾಗಿದೆ ಎಂದು ಮೆಚ್ಚುಗೆಯನ್ನು ವ್ಯಕ್ತಪಡಿದರು.

ಡಾ. ಬೈರಮಂಗಲ ರಾಮೇಗೌಡ ಅವರ ಪ್ರಸ್ತಾವನೆ ಮತ್ತು ಪ್ರಶಸ್ತಿ ಪುರಸ್ಕೃತರ ಪರಿಚಯದೊಡನೆ ಮುಂದುವರೆದ ಈ ಕಾರ್ಯಕ್ರಮದಲ್ಲಿ ಡಾ. ಶಾಂತರಾಜು ಸ್ವಾಗತ ಕೋರಿ ಮತ್ತು ದತ್ತಿ ಸ್ಥಾಪಕರನ್ನು ಸಭೆಗೆ ಪರಿಚಯಿಸಿದರು.

ಡಾ.ಎಸ್. ಅನಿಲ್‌ಕುಮಾರ್ ಅವರ ವಂದನಾರ್ಪಣೆಯೊಂದಿಗೆ ಮುಕ್ತಾಯವಾದ ಈ ಕಾರ್ಯಕ್ರಮವು ಡಾ. ಸುಜಾತಾ ಲಕ್ಷ್ಮೀಪುರ ಅವರ ನಿರೂಪಣೆಯಲ್ಲಿ ಅಚ್ಚುಕಟ್ಟಾಗಿ ಮೂಡಿಬಂದಿತು.

ಸಂಪಾದಕೀಯ

ಕನ್ನಡ ಸಾಹಿತ್ಯ ಇಂದು ಈ ಮಟ್ಟಕ್ಕೆ ಬಂದು ತಲುಪಲು ಶತಮಾನಗಳಿಂದ ಸಾವಿರಾರು ಸಾಹಿತಿಗಳು ಶ್ರಮಿಸಿರುತ್ತಾರೆ. ಇಂತಹವರ ಪೈಕಿ ಪ್ರಮುಖರ ಕೊಡುಗೆಗಳು ಇತಿಹಾಸದ ಪುಟಗಳಲ್ಲಿ ದಾಖಲಾಗಿದ್ದರೂ ಇಂದಿನ ಪೀಳಿಗೆಯವರಿಗೆ ಅವರುಗಳ ಬಗ್ಗೆ ಹೆಚ್ಚು ತಿಳಿದಿಲ್ಲ ಹಾಗೂ ತಿಳಿಸಿಕೊಡುವ ವ್ಯವಸ್ಥೆಯೂ ಇಲ್ಲ.

ಕನ್ನಡ ಸಾಹಿತ್ಯದ ಸೇವೆ ಮಾಡಿರುವವರ ಪೈಕಿ ಕೆಲವೇ ಕೆಲವು ಪ್ರಮುಖರನ್ನು ಪರಿಚಯಿಸುವ ಮ್ಯೂಸಿಯಮ್ ಗಳಿವೆ. ಹಲವು ಪ್ರಮುಖ ಸಾಹಿತಿಗಳ ಬಗ್ಗೆಯ ಅಭಿನಂದನ ಗ್ರಂಥಗಳು ಪ್ರಕಟಗೊಂಡಿವೆ. ಹಲವಾರು ಸಾಹಿತಿಗಳ ಬಗ್ಗೆ ಪುಸ್ತಕಗಳು, ಹೊತ್ತಿಗೆಗಳು ಹಾಗೂ ಕೆಲವು ಬಿಡಿ ಲೇಖನಗಳು ಮಾತ್ರ ಲಭ್ಯವಿವೆ. ಆದರೆ ಬಹಳಷ್ಟು ಸಾಹಿತಿಗಳು ಬಹುಕಾಲ ಅನಾಮಧೇಯರಾಗಿದ್ದುಕೊಂಡೇ ಸಾಹಿತ್ಯ ಸೇವೆ ಸಲ್ಲಿಸಿ ಅನಾಮಧೇಯರಾಗಿಯೇ ಕಣ್ಮರೆಯಾಗಿದ್ದಾರೆ. ಹಾಗೆ ನೋಡಿದರೆ ಎಷ್ಟೋ ಜನ ಉದ್ದಾಮ ಸಾಹಿತಿಗಳ ಕೃತಿಗಳೂ ಅಲಭ್ಯ ಮತ್ತು ಅವರ ಬಗ್ಗೆಯ ವಿವರಗಳೂ ಅಲಭ್ಯ. ಹೀಗಾಗಿ ಅವರುಗಳ ಬಗ್ಗೆ ಇಂದಿನ ಪೀಳಿಗೆಯವವರಿಗೆ ಮಾಹಿತಿ ದೊರಕುವುದಾದರೂ ಹೇಗೆ.

ಸಾಹಿತ್ಯ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಇತರ ಕನ್ನಡ ಪರ ಸಂಸ್ಥೆಗಳಲ್ಲಿ ಎಷ್ಟೋ ಜನರ ಬಗ್ಗೆಯ ಕೆಲವು ಮಾಹಿತಿಗಳು ದೊರಕುತ್ತಿದ್ದರೂ ಈ ಮಾಹಿತಿಗಳನ್ನು ಒಂದೆಡೆಗೆ ಸಮಗ್ರವಾಗಿ ಕೂಡಿಡಲು ಯಾವುದೇ ರೀತಿಯ ವ್ಯವಸ್ಥಿತ ಅನುಕೂಲತೆಗಳು ಇಲ್ಲ. ಕನ್ನಡ ಸಾಹಿತ್ಯದ ಬೆಳವಣಿಗೆಗೆ ಶ್ರಮಿಸಿರುವ ಹಾಗೂ ಉತ್ಕೃಷ್ಟ ಕೊಡುಗೆಗಳನ್ನು ನೀಡಿದಂತಹ ಮಹಾನುಭಾವರ ವಿವರಗಳನ್ನು ದಾಖಲಿಸಲು ಮತ್ತು ಕೊಡುಗೆಗಳ ಗುಣಮಟ್ಟಗಳನ್ನು ಅಂದಾಜಿಸುವ ವ್ಯವಸ್ಥೆಯನ್ನು ರೂಪಿಸುವ ಪರಿಕಲ್ಪನೆಯೂ ಮೂಡಿರುವ ಹಾಗೆ ಕಾಣಿಸುತ್ತಿಲ್ಲ.

ಈ ಬಗ್ಗೆ ಮುಂದೆಯೂ ಚಿಂತನೆ ನಡೆಸೋಣ.

– ಬಿ.ಆರ್. ರವೀಂದ್ರನಾಥ್

## ಪ್ರಕಟಣೆ

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಸ್ಥಾಪಿತವಾಗಿರುವ 'ಗೋವಿಂದ ಜಾಲಿಹಾಳ ದತ್ತಿ' ಕಾರ್ಯಕ್ರಮದ ಅಂಗವಾಗಿ ೨೦೨೨ರ ಜೂನ್ ೨೬ರಂದು ಭಾನುವಾರ ೧೩ ರಿಂದ ೧೮ ವರ್ಷಗಳ ನಡುವಣ ಯುವಜನತೆಗಾಗಿ 'ಭಕ್ತಿಗೀತೆ ಗಾಯನ' ಸ್ಪರ್ಧೆಯನ್ನು ಪ್ರತಿಷ್ಠಾನದ ಎಂ.ವಿ.ಸೀ. ಸಭಾಂಗಣದಲ್ಲಿ ನಡೆಸಲಾಗುವುದು. ಸ್ಪರ್ಧೆಯಲ್ಲಿ ಗೆದ್ದವರಿಗೆ ಬಹುಮಾನಗಳನ್ನೂ, ಪ್ರಶಸ್ತಿ ಪತ್ರಗಳನ್ನೂ ನೀಡಲಾಗುವುದು. ಸ್ಪರ್ಧೆಯು ಅಂದು ಬೆಳಗ್ಗೆ ೧೦-೩೦ ಗಂಟೆಗೆ ಆರಂಭವಾಗುತ್ತದೆ.

ಅನಂತರ ಬಹುಮಾನ ವಿತರಣೆ ನಡೆಯುತ್ತದೆ. ಆಸಕ್ತರು ಹುಟ್ಟಿದ ತಾರೀಖಿನ ಬಗೆಗಿನ ದಾಖಲೆಯೊಡನೆ ೨೦-೬-೨೦೨೨ರ ಒಳಗೆ ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳಬಹುದು. ಪ್ರವೇಶ ಶುಲ್ಕವಿಲ್ಲ. ಹೆಚ್ಚಿನ ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಬಹುದು.

**ಮೊಬೈಲ್ ಸಂಖ್ಯೆ- ೯೯೭೨೮೧೨೧೨೬**

೦೬-೦೪-೨೦೨೨

## ಡಾ. ಪಿ.ವಿ. ನಾರಾಯಣ ಅವರ ಸಂಸ್ಕೃತಿ – ಕವಿಕೃತಿ ಕೃತಿ ಲೋಕಾರ್ಪಣೆ ಮಾಡಲಾಯಿತು.



ಶ್ರೀ ಬಿ.ಎಸ್.ಗುರುಪ್ರಸಾದ್, ಡಾ.ಆರ್.ಲಕ್ಷ್ಮೀನಾರಾಯಣ, ಡಾ. ಬೈರಮಂಗಲರಾಮೇಗೌಡ, ಡಾ.ಪಿ.ವಿ.ನಾರಾಯಣ, ಡಾ.ಎನ್.ಆರ್.ಲಲಿತಾಂಬ ಮತ್ತು ಡಾ. ಶಾಂತರಾಜು ಅವರು ಪಾಲ್ಗೊಂಡಿದ್ದರು.

ಕನ್ನಡ ಸಾಹಿತಿಗಳೂ, ಕನ್ನಡ ಪರ ಹೋರಾಟಗಾರರೂ, ಸಂಸ್ಕೃತಿ ಚಿಂತಕರೂ ಆದ ಡಾ.ಪಿ.ವಿ.ನಾರಾಯಣ ಅವರು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ಪ್ರಾಚೀನ ಸಾಹಿತ್ಯದಿಂದ ಆಧುನಿಕ ಸಾಹಿತ್ಯದವರೆಗೆ ಓದಿನ ಹರಹನ್ನು ಹೊಂದಿರುವ ಪಿ.ವಿ.ಎನ್. ಅವರ 'ಸಂಸ್ಕೃತಿ ಕವಿಕೃತಿ' ಎಂಬ ಕೃತಿಯ ಶೀರ್ಷಿಕೆಯೇ ತಿಳಿಸುವಂತೆ ಕನ್ನಡ ಸಂಸ್ಕೃತಿಯನ್ನೂ, ಕನ್ನಡದಲ್ಲಿ ಮೈಲುಗಲ್ಲೆನಿಸಿದ ಕೆಲವು ಕವಿಕೃತಿಗಳನ್ನೂ ಸಹೃದಯ ವಲಯಕ್ಕೆ ವಿಶಿಷ್ಟವಾಗಿ ಪರಿಚಯಿಸುವ ಉತ್ತಮ ಕೃತಿ ಇದಾಗಿದೆ. ಸಂಸ್ಕೃತಿಯನ್ನು, ಚಂಪೂ ಸಾಹಿತ್ಯವನ್ನು, ಕನ್ನಡ ಸಾಹಿತ್ಯವನ್ನು, ಕರ್ನಾಟಕದ ಧಾರ್ಮಿಕ ಪಂಥಗಳನ್ನು, ವಚನ ಸಾಹಿತ್ಯವನ್ನು, ಹತ್ತು ಲೇಖನಗಳಲ್ಲಿ ಬಹುಚರ್ಚಿತವಾದ ಅನೇಕ ವಿಚಾರಗಳನ್ನು ಶೋಧಿಸಿ ತಮ್ಮ ನಿಲುವನ್ನು ಸ್ಪಷ್ಟಪಡಿಸಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ನಿರಂತರವಾಗಿ ಅಧ್ಯಯನಕ್ಕೆ ಒಳಪಟ್ಟಿರುವ, ಅನೇಕ ವಾಗ್ವಾದಗಳಿಗೆ ಕಾರಣವಾಗಿರುವ ಕವಿರಾಜಮಾರ್ಗ, ರನ್ನಕಂದ, ಸಮಯಪರೀಕ್ಷೆ, ಕುಮುದೇಂದು ರಾಮಾಯಣ, ಶೂನ್ಯ ಸಂಪಾದನೆ, ಪದ್ಮಿನೀ ಪರಿಣಯ ಮತ್ತು ರಾಜಾವಳಿ ಕಥಾಸಾರ ಕೃತಿಗಳ ಕಾಲ, ವೈಶಿಷ್ಟ್ಯ ಹಾಗೂ ಮಹತ್ವಗಳ ಬಗೆಗೆ ಚರ್ಚಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಬಾಹುಬಲಿಯ ಪಾತ್ರ ಚಿತ್ರಣಗೊಂಡಿರುವ ಬಗೆಯನ್ನು ಮತ್ತು ಪೂರಕವಾದ ಕಾರಣವನ್ನು ವಿಶ್ಲೇಷಿಸಿ, ಕನ್ನಡ ಸಾಹಿತ್ಯದಲ್ಲಿ ವೈದಿಕ ರಾಮಾಯಣ ಪರಂಪರೆಗೆ ಅಮೂಲ್ಯವಾದ ರಾಮಾಯಣ ಕೃತಿಯನ್ನು ನೀಡಿದ ಪ್ರಧಾನ ವೆಂಕಾಮಾತ್ಯನ ಸಾಹಿತ್ಯ ಸಾಧನೆಯನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ.

### ಬಿ.ಎಂ.ಶ್ರೀ. ಪ್ರತಿಷ್ಠಾನದ ಬದಲಾದ ದೂರವಾಣಿ ಸಂಖ್ಯೆ

**ಬಿ.ಎಂ.ಶ್ರೀ.ಪ್ರತಿಷ್ಠಾನದ ಸ್ಥಿರ ದೂರವಾಣಿ ಸಂಖ್ಯೆ ರದ್ದುಗೊಂಡಿದ್ದು ಸಂಚಾರಿ ದೂರವಾಣಿ ಸಂಖ್ಯೆ – ೯೯೭೨೮೧೨೧೨೬ ಈ ದೂರವಾಣಿಯ ಮೂಲಕವೇ ಸಂಪರ್ಕಿಸ ಬೇಕಾಗಿ ಕೋರುತ್ತೇವೆ.**

# ಜೂನ್ ೨೦೨೨ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

೦೨–೦೬–೨೦೨೨. ಗುರುವಾರ ಸಂಜೆ : ೦೫–೦೦ ಗಂಟೆಗೆ

ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ

**ಶ್ರೀಮತಿ ಜಯಲಕ್ಷ್ಮಮ್ಮ ಬಾಪು ರಾಮಣ್ಣ ದತ್ತಿ ಉಪನ್ಯಾಸ ಕಾರ್ಯಕ್ರಮ**

**ವಿಷಯ : ಅಕ್ಕಮಹಾದೇವಿ ವಚನಗಳ ವಿವೇಚನೆ**

ಉಪನ್ಯಾಸಕರು : ಡಾ. ಎಸ್.ಎಚ್. ಭುವನೇಶ್ವರ
ನಿವೃತ್ತ ಪ್ರಾಧ್ಯಾಪಕರು, ವಿಮರ್ಶಕರು

೧೬–೦೬–೨೦೨೨ ಗುರುವಾರ ಸಂಜೆ : ೫–೦೦ ಗಂಟೆಗೆ

ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ

**ಶ್ರೀಮತಿ ಎಸ್.ಕೆ. ಪ್ರೇಮ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ದತ್ತಿ ಉಪನ್ಯಾಸ ಕಾರ್ಯಕ್ರಮ**

**ವಿಷಯ : ಪುಷ್ಪರಗಳೆ ಒಂದು ಅವಲೋಕನ**

ಉಪನ್ಯಾಸಕರು : ಡಾ. ಪ್ರೇಮಾ ಸಿದ್ಧರಾಜು

೨೬–೦೬–೨೦೨೨ ಭಾನುವಾರ ಬೆಳಗ್ಗೆ : ೧೦–೩೦ ಗಂಟೆಗೆ

ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ

**ಗೋವಿಂದ ಜಾಲಿಹಾಳ ಸಂಗೀತ ಸ್ಪರ್ಧೆ ಕಾರ್ಯಕ್ರಮ**

**ವಿಷಯ : ಭಕ್ತಿಗೀತೆ ಗಾಯನ ಸ್ಪರ್ಧೆ**

### ಡಾ. ಗೋವಿಂದರಾವ್ ಜಾಲೀಹಾಳ್

ಎಂ.ಎ., ಪಿಎಚ್.ಡಿ., ಎಫ್.ಎ.ಜಿ.ಇ.,ಸಿ.ಒ.ಆರ್.ತತ್ವಶಾಸ್ತ್ರದ ನಿವೃತ್ತ ಪ್ರೊಫೆಸರ್, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು)

ಗದುಗಿನ ಪ್ರಸಿದ್ಧ ವಕೀಲರಾಗಿದ್ದ ಗದುಗಿನ ಗಾಂಧಿ ದಿ.ಅನಂತರಾವ್ 'ಜಾಲೀಹಾಳ, ವಕೀಲರು ಹಾಗೂ ಅವರ ಧರ್ಮಪತ್ನಿ ದಿ॥ ರಾಧಾಬಾಯಿ ದಂಪತಿಗಳ ಐದನೆಯ ಹಾಗೂ ಕೊನೆಯ ಪುತ್ರರಾಗಿ ೧೯೩೬ರ ಜೂನ್ ೨೨ ರಂದು ಜನಿಸಿದ ಡಾ. ಗೋವಿಂದರಾವ್ ಜಾಲಿಹಾಳ್ ಅವರು ಜಾ.ಗೋ. ಎಂದೇ ಪ್ರಸಿದ್ಧರಾಗಿದ್ದಾರೆ. ಅಮೇರಿಕಾದ ಫ್ಲಾರಿಡಾದ ಪೆನ್ಸಕೋಲಾದ ಕಾಲೇಜು ಮತ್ತು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿ ಕರ್ತವ್ಯ ನಿರ್ವಹಿಸಿ ೧೯೩೬ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಿಂದ ನಿವೃತ್ತಿ ಹೊಂದಿದರು. ಬಾಲ್ಯದಿಂದಲೇ ಸಂಗೀತದಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದ ಇವರು ಅನೇಕ ಬಹುಮಾನಗಳನ್ನು ಪಡೆದು ಉತ್ತಮ ಗಾಯಕರೆನಿಸಿಕೊಂಡಿದ್ದರು. ೧೯೬೮ರಲ್ಲಿ ಅಡಿಗರ ಸಾಕ್ಷಿ ಪತ್ರಿಕೆಯಲ್ಲಿ ಶೌರಿಯವರ 'ಹಳದಿ ಮೀನು' ಎಂಬ ಕಾದಂಬರಿಯನ್ನು ವಿಮರ್ಶೆ ಮಾಡುವುದರ ಮೂಲಕ ಸಾಹಿತ್ಯ ವಿಮರ್ಶಾ ಲೋಕವನ್ನು ಪ್ರವೇಶಿಸಿದರು. ಮುಂದೆ ನಾಡಿನ ಜನಪ್ರಿಯ ಪತ್ರಿಕೆಗಳಲ್ಲಿ ವಿಮರ್ಶಾ ಲೇಖನಗಳು ಪ್ರಕಟವಾದವು. ವಂಶವೃಕ್ಷ ಮತ್ತು ಸಂಸ್ಕಾರ ಒಂದು ತುಲನಾತ್ಮಕ ವಿಮರ್ಶೆ ಹಾಗೂ ಕಾವ್ಯ ಮಂಥನ ಎಂಬ ಎರಡು ವಿಮರ್ಶಾ ಕೃತಿಗಳನ್ನೂ, ಅಂಚೆಯ ದಾರಿಯಲ್ಲಿ ನಯನ ಪಥ ಎಂಬ ಕವಿತಾ ಸಂಕಲನವನ್ನು ಪ್ರಕಟಿಸಿದ್ದಾರೆ. ಪತ್ನಿ ಮೀರಾ, ಪುತ್ರ ಮಿಲಿಂದ, ಸೊಸೆ ಮಾನಸಿ ಮತ್ತು ಪೌತ್ರ ಮಿಹಿರ ಅವರೊಂದಿಗೆ ಸುಖಮಯ ಜೀವನ ಸಾಗಿಸುತ್ತಿರುವ ಡಾ.ಜಾ.ಗೋ ಭಾರತೀಯ ಶಾಸ್ತ್ರೀಯ ಸಂಗೀತದಲ್ಲಿ ಆಳವಾದ, ವಿಸ್ತಾರವಾದ ಅನುಭವವನ್ನು ಪಡೆದು ಸಂಗೀತ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಅವಿಸ್ಮರಣೀಯ ಕೊಡುಗೆ ನೀಡಿದ್ದಾರೆ.

ಇವರ ಪುತ್ರ ಶ್ರೀ ಮಿಲಿಂದ್ ಜಾಲಿಹಾಳ್ ಅವರು ತಮ್ಮ ತಂದೆಯ ನೆನಪಿನಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ದತ್ತಿಯನ್ನು ಸ್ಥಾಪಿಸಿದ್ದಾರೆ.

### ಜಯಲಕ್ಷಮ್ಮ ಬಾಪು ರಾಮಣ್ಣ ದತ್ತಿ

ಶ್ರೀಮತಿ ಜಯಲಕ್ಷಮ್ಮ ಹಾಗೂ ಶ್ರೀ ಬಾಪು ರಾಮಣ್ಣ ಇವರಿಬ್ಬರೂ ಸಂಗೀತಪ್ರಿಯರು ಹಾಗೂ ಓದುಬರಹಗಳಲ್ಲಿ ಅಪಾರ ಆಸಕ್ತಿ ಉಳ್ಳವರಾಗಿದ್ದವರು. ಶ್ರೀ ಬಾಪು ರಾಮಣ್ಣ ಬಿ.ಎಂ.ಶ್ರೀ.ಯವರ ಪಟ್ಟ ಶಿಷ್ಯರಾಗಿದ್ದರು ಹಾಗೂ ಶ್ರೀಯವರ 'ಇಂಗ್ಲಿಷ್ ಗೀತೆಗಳು' ಕಾವ್ಯ ರಚನೆಗಳಿಗೆ ಹಿಂದೆಯೇ ರಾಗ ಸಂಯೋಜನೆ ಮಾಡಿ ಹಾಡುತ್ತಿದ್ದವರು. ಅಲ್ಲದೆ 'ಅಶ್ವತ್ಥಾಮನ್' ನಾಟಕದಲ್ಲಿ ಮೇಳನಾಯಕನಾಗಿ ಪಾತ್ರವಹಿಸಿ, ಅದರ ಹಾಡುಗಳಿಗೆಲ್ಲಾ ರಾಗಸಂಯೋಜನೆ ಮಾಡಿ ಹಾಡಿ ಪ್ರಚಾರ ಮಾಡಿದ್ದರು.

ಅವರ ನೆನಪಿನಲ್ಲಿ ಅವರ ಮಕ್ಕಳಾದ ಶ್ರೀ ಹೆಚ್.ಆರ್. ಬಾಪು ಸತ್ಯನಾರಾಯಣ ಮತ್ತು ಶ್ರೀಮತಿ ಹೆಚ್.ಆರ್. ಲೀಲಾವತಿ ತಮ್ಮ ತಾಯಿ, ತಂದೆಯರ ಹೆಸರಿನಲ್ಲಿ ಒಂದು ದತ್ತಿಯನ್ನು ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಸ್ಥಾಪಿಸಿ ಪ್ರತಿವರ್ಷ ಒಂದು ಸಂಗೀತ ಕಾರ್ಯಕ್ರಮ(ಗಮಕ ಅಥವಾ ಸಂಗೀತ) ನಡೆಸಲು ಕೋರಿರುತ್ತಾರೆ.

### ಶ್ರೀಮತಿ ಎಸ್.ಕೆ. ಪ್ರೇಮ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ದತ್ತಿ

ಪ್ರಸಿದ್ಧ ಕವಿ, ವಿಮರ್ಶಕ, ವಿದ್ವಾಂಸರಾದ ಪ್ರೊ.ಜಿ.ಎಸ್.ಸಿದ್ಧಲಿಂಗಯ್ಯನವರ ಧರ್ಮಪತ್ನಿಯಾದ ಪ್ರೇಮ ಅವರು ಸಕಲೇಶಪುರದ ಶ್ರೀ ಶಾಂತಮಲ್ಲಯ್ಯ ಮತ್ತು ಶ್ರೀಮತಿ ಚೆನ್ನಮ್ಮನವರ ಆರನೇ ಪುತ್ರಿ.

ಇವರ ಹೆಸರಿನಲ್ಲಿ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ಪ್ರತಿವರ್ಷ ಜೂನ್ ತಿಂಗಳನಲ್ಲಿ ದತ್ತಿ ಉಪನ್ಯಾಸ ಏರ್ಪಡಿಸಲು ಪ್ರತಿಷ್ಠಾನದಲ್ಲಿ ಒಂದು ಲಕ್ಷ ರೂ.ಗಳ ದತ್ತಿಯನ್ನು ಸ್ಥಾಪಿಸಿದ್ದಾರೆ.

# ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೧೩-೫-೨೦೨೨

## ಶ್ರೀ ವೈಯಾಕರಣಿ ಗರಣಿ ಕೃಷ್ಣಾಚಾರ್ಯ ದತ್ತಿ ಉಪನ್ಯಾಸ ಕಾರ್ಯಕ್ರಮ

**ವಿಷಯ : ಶಂಕರ ಮೊಕಾಶಿ ಪುಣೇಕರ**

**ಉಪನ್ಯಾಸಕರು : ಶ್ರೀ ಬಿ.ಎಸ್. ಗುರುಪ್ರಸಾದ್,** ಹಸ್ತಪ್ರತಿ ಸಂಯೋಜಕರು, ಬಿ.ಎಂ.ಶ್ರೀ. ಪ್ರತಿಷ್ಠಾನ




ವೈಯಾಕರಣಿ ಗರಣಿ ಕೃಷ್ಣಾಚಾರ್ಯ ದತ್ತಿ ಕಾರ್ಯಕ್ರಮದಡಿಯಲ್ಲಿ ಹಿಂದಿನಿಂದ ನಡೆಸಿಕೊಂಡು ಬಂದು ಕೊರೋನಾ ಕಾರಣದಿಂದ ಸ್ಥಗಿತವಾಗಿದ್ದ 'ಮರೆಯಬಾರದ ಮಹಾನುಭಾವರು' ಸರಣಿ ಕಾರ್ಯಕ್ರಮವನ್ನು ಪುನರಾರಂಭಿಸುವ ಉದ್ದೇಶದಿಂದ ಶಂಕರ ಮೊಕಾಶಿ ಪುಣೇಕರ ಅವರನ್ನು ನೆನಪಿಸಿಕೊಳ್ಳಲಾಯಿತು. ಮೊಕಾಶಿ ಅವರ ವ್ಯಕ್ತಿತ್ವ ಮತ್ತು ಸಾಧನೆ ಕುರಿತು ಬಿ.ಎಂ.ಶ್ರೀ. ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ಸಂಯೋಜನಾಧಿಕಾರಿಯಾಗಿ ಕರ್ತವ್ಯವನ್ನು ನಿರ್ವಹಿಸುತ್ತಿರುವ ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಉಪನ್ಯಾಸ ನೀಡಿದರು. ಅವರ ವ್ಯಕ್ತಿತ್ವ, ಸಾಹಿತ್ಯದ ವೈಶಿಷ್ಟ್ಯ, ಸಂಶೋಧನೆಯ ನಿಲುವುಗಳನ್ನು ಕುರಿತು ವಿವರವಾಗಿ ಮಾತನಾಡುವುದರ ಮೂಲಕ ತಮ್ಮ ಅಧ್ಯಯನಾಸಕ್ತಿಯನ್ನು ಪ್ರಕಟಿಸಿದರು. ಪ್ರಾಸ್ತಾವಿಕವಾಗಿ ಪುಣೇಕರರ ಸಾಹಿತ್ಯದ ವೈಶಾಲ್ಯತೆಯನ್ನು ಪರಿಚಯಿಸಿ ದತ್ತಿ ಉಪನ್ಯಾಸವನ್ನು ಕುರಿತು ಡಾ.ಬೈರಮಂಗಲ ರಾಮೇಗೌಡ ಅವರು ಮಾತನಾಡಿದ ಈ ಕಾರ್ಯಕ್ರಮದ ಸ್ವಾಗತ ಮತ್ತು ವಂದನಾರ್ಪಣೆಯನ್ನು ಡಾ.ಶಾಂತರಾಜು ನಿರ್ವಹಿಸಿದರು.

೨೦-೫-೨೦೨೨

## ಶ್ರೀ ಕೆ.ವೆಂ. ರಾಘವಾಚಾರ್- ಶ್ರೀ ಡಿ.ವಿ.ಜಿ. ಗುಂಡಪ್ಪ- ಶ್ರೀ ಬಿ.ಎಸ್. ಸಣ್ಣಯ್ಯ, ಡಾ. ಎಂ.ಎಲ್. ಲಲಿತಮ್ಮ ದತ್ತಿ ಉಪನ್ಯಾಸ ಕಾರ್ಯಕ್ರಮ




**ವಿಷಯ : 'ಚಿದಾನಂದ ಮೂರ್ತಿ ಅವರ ಜೀವನ ಸಾಧನೆ'**

**ಉಪನ್ಯಾಸಕರು : ಡಾ. ಸಿ.ಯು. ಮಂಜುನಾಥ್,** ಸಂಶೋಧಕರು, ಸಾಹಿತಿಗಳು ಮತ್ತು ನಿವೃತ್ತಪ್ರಾಂಶುಪಾಲರು

"ಕಡು ಬಡತನದ ಕುಟುಂಬದಲ್ಲಿ ಹುಟ್ಟಿ, ವಿದ್ಯೆ ಕಲಿಯುವುದರಲ್ಲಿ ಅಪಾರ ಆಸಕ್ತಿ ತೋರಿ, ಮುಂದೆ ಸಂಶೋಧನಾ ಕ್ಷೇತ್ರದಲ್ಲಿ ಅದ್ಭುತವಾದ ಸಾಧನೆ ಮಾಡಿದ ಎಂ. ಚಿದಾನಂದಮೂರ್ತಿಯವರು ಎಂ.ಎ.ತರಗತಿಗಳಲ್ಲಿ ನನಗೆ ಗುರುವೂ ಮಾರ್ಗದರ್ಶಕರೂ ಆಗಿದ್ದರು. ಅವರ ಒಡನಾಟದಲ್ಲಿ ಬಹಳಷ್ಟನ್ನು ಕಲಿತು ಅಳವಡಿಸಿಕೊಳ್ಳಲು ಸಾಧ್ಯವಾಯಿತು ಎನ್ನುವುದು ನನ್ನ ಹೆಮ್ಮೆ. ಸಂಶೋಧನೆಯ ವಿಚಾರದಲ್ಲಿ ಅವರಿಗಿದ್ದ ಕಠೋರವಾದ ಶಿಸ್ತನ್ನು ನಾನು ಇನ್ನೊಬ್ಬರಲ್ಲಿ ಕಂಡಿಲ್ಲ. ಇಂಟರ್ ಮೀಡಿಯೆಟ್ ಪರೀಕ್ಷೆಯಲ್ಲಿ ಚಿದಾನಂದಮೂರ್ತಿಯವರು ರಾಜ್ಯಕ್ಕೆ ೧೦ನೇ ರ್‍ಯಾಂಕ್ ಪಡೆದಿದ್ದರು. ಹಾಗೆ ರ್‍ಯಾಂಕ್ ಪಡೆದವರು ಮೆಡಿಕಲ್ ಅಥವಾ ಇಂಜಿನಿಯರಿಂಗ್ ಆಯ್ಕೆಮಾಡಿಕೊಳ್ಳುತ್ತಿದ್ದರು. ಆದರೆ ಮೇಷ್ಟ್ರು ಅದನ್ನು ನಿರಾಕರಿಸಿ ಸಾಹಿತ್ಯ ಸಂಶೋಧನೆಯ ಬಗೆಗಿನ ಒಲವಿನಿಂದ ಮೈಸೂರನ್ನು ಸೇರಿ, ತೀ.ನಂ. ಶ್ರೀಕಂಠಯ್ಯನವರ ಗರಡಿಯಲ್ಲಿ ತಯಾರಾಗಿ, ಉನ್ನತ ಸಾಧನೆ ಮಾಡುವುದು ಸಾಧ್ಯವಾಯಿತು. ಕನ್ನಡ ವಿಶ್ವವಿದ್ಯಾಲಯ ಪ್ರಾರಂಭವಾಗಬೇಕೆನ್ನುವ ಹೋರಾಟ ಪ್ರಾರಂಭವಾಗಿದ್ದು ಚಿದಾನಂದಮೂರ್ತಿಯವರಿಂದಲೇ ಆದರೂ ಅದರ ಪ್ರಥಮ ಕುಲಪತಿಯಾಗಬೇಕೆನ್ನುವ ಮನವಿಯನ್ನೂ, ಎಂ.ಎಲ್.ಸಿ. ಆಗುವ ಅವಕಾಶವನ್ನೂ ಅವರು ತಿರಸ್ಕರಿಸಿದರು. ಬರೆವಣಿಗೆ ಮತ್ತು ಸಂಶೋಧನೆ ನನ್ನ ಜಗತ್ತು. ಆಡಳಿತಾತ್ಮಕ ವಿಚಾರಗಳಲ್ಲಿ ನನಗೆ ಆಸಕ್ತಿಯಿಲ್ಲ. ಅದರಲ್ಲಿ ನಾನು ಯಶಸ್ವಿಯಾಗಲಾರೆ ಎಂದು ಅವರು ಸ್ಪಷ್ಟವಾಗಿ ಹೇಳಿದರು. ಮನೆ ಸಮೀಪದಲ್ಲಿದ್ದುದರಿಂದ ನಮ್ಮ ಭೇಟಿ ಆಗಾಗ ಆಗುತ್ತಲೇ ಇತ್ತು. ಸಂಶೋಧನೆಗೆ ಸಂಬಂಧಿಸಿದ ಯಾವುದೇ ವಿಚಾರ ಅವರ ತಲೆಯಲ್ಲಿ ಹೊಳೆದರೂ ತಡಮಾಡದೆ ನನ್ನೊಂದಿಗೆ ಹಂಚಿಕೊಳ್ಳುತ್ತಿದ್ದರು. ಆದರೆ ತೀವ್ರ ಅನಾರೋಗ್ಯದಿಂದ ಉಸಿರಾಡುವುದು ಕಷ್ಟವಾಗುತ್ತಿದ್ದ ಅವರು ಸಾಯುವ ಒಂದು ದಿನ ಮೊದಲು ಮನದೊಳಗೆ ಕೊರೆಯುತ್ತಿದ್ದ ಏನನ್ನೋ ನನಗೆ ಹೇಳಲು ಪ್ರಯತ್ನಿಸಿದರಾದರೂ ಮಾತನಾಡಲು ಅವರಿಗೆ ಸಾಧ್ಯವಾಗಲಿಲ್ಲ"

ಬಿ.ಎಂ.ಶ್ರೀ. ಪ್ರತಿಷ್ಠಾನದ ಕ.ವೆಂ.ರಾಘವಾಚಾರ್, ಡಿ.ವಿ.ಗುಂಡಪ್ಪ, ಬಿ.ಎಸ್. ಸಣ್ಣಯ್ಯ, ಡಾ.ಎಂ.ಎಲ್. ಲಲಿತಮ್ಮ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಸಾಹಿತಿ ಮತ್ತು ಸಂಶೋಧಕರಾದ ಡಾ.ಸಿ.ಯು. ಮಂಜುನಾಥ್ ಅವರು 'ಡಾ.ಎಂ.ಚಿದಾನಂದಮೂರ್ತಿ ಅವರ ಜೀವನ ಮತ್ತು ಸಾಧನೆ ಕುರಿತು ವಿಶೇಷ ಉಪನ್ಯಾಸ ನೀಡಿ ಮೇಲಿನಂತೆ ಮಾತನಾಡಿದರು. ಅಧ್ಯಕ್ಷತೆ ವಹಿಸಿ ಪ್ರಾಸ್ತಾವಿಕವಾಗಿ ಮಾತನಾಡಿದ ಡಾ. ಬೈರಮಂಗಲ ರಾಮೇಗೌಡ "ತೀ.ನಂ.ಶ್ರೀಕಂಠಯ್ಯನವರ ಮಾರ್ಗದರ್ಶನದಲ್ಲಿ ಚಿದಾನಂದಮೂರ್ತಿಯವರು ಸಿದ್ಧಪಡಿಸಿದ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಮಹಾಪ್ರಬಂಧ ಅವರ ಆಳವಾದ ಬಹುಮುಖ ಅಧ್ಯಯನ, ವಿಸ್ತಾರವಾದ ಕ್ಷೇತ್ರಕಾರ್ಯ, ಪ್ರಚಂಡವಾದ ವಿದ್ವತ್ತು, ಪ್ರಖರವಾದ ಚಿಂತನೆ ಮತ್ತು ವಿಶಿಷ್ಟ ಒಳನೋಟಗಳ ಶ್ರೇಷ್ಠವಾದ ಕೃತಿ; ಶ್ರದ್ಧೆ ಮತ್ತು ಶಿಸ್ತಿನಿಂದ ಪಿಎಚ್.ಡಿ. ಅಧ್ಯಯನ ಮಾಡಬೇಕೆಂದು ಬಯಸುವವರಿಗೆ ಈಗಲೂ ಒಂದು ಆದರ್ಶ. ತರಗತಿಗಳು ಇದ್ದಾಗ ಕನ್ನಡ ಅಧ್ಯಯನ ಕೇಂದ್ರದಲ್ಲಿರುತ್ತಿದ್ದರು, ಉಳಿದಂತೆ ಹೆಚ್ಚಿನ ಸಮಯವನ್ನು ಗ್ರಂಥಾಲಯದಲ್ಲೇ ಕಳೆಯುತ್ತಿದ್ದರು. ಅವರ ಪಾಠ ಮತ್ತು ಭಾಷಣ ಎರಡೂ ಕೂಡ ಭಾವಾವೇಶ, ಭಾವೋದ್ವೇಗ, ಭಾವಪೂರ್ಣತೆಗಳ ಸಮ್ಮಿಶ್ರಣದಂತಿದ್ದು ಕೇಳುವವರ ಎದೆಗೆ ನೇರವಾಗಿ ನಾಟುತ್ತಿದ್ದವು. ೧೯೩೧ರಲ್ಲಿ ಹುಟ್ಟಿ ೨೦೨೦ರಲ್ಲಿ ಲೋಕದಿಂದ ನಿರ್ಗಮಿಸಿದ, ೯೦ ವರ್ಷಗಳ ತುಂಬು ಜೀವನ ನಡೆಸಿದ ಚಿದಾನಂದಮೂರ್ತಿಯವರ ವಿದ್ವತ್ತು ಮತ್ತು ಸಂಶೋಧನೋತ್ಸಾಹದ ವ್ಯಕ್ತಿತ್ವ ಅವರಿಗೆ ಅವರೇ ಸಾಟಿ ಎನಿಸುವಂಥದ್ದು" ಎಂದು ಹೇಳಿದರು.ಡಾ.ಶಾಂತರಾಜು ಸ್ವಾಗತ ಮತ್ತು ವಂದನಾರ್ಪಣೆಗಳೊಂದಿಗೆ ಕಾರ್ಯಕ್ರಮವನ್ನು ನಿರ್ವಹಿಸಿದರು. ಕಾರ್ಯಕಾರಿ ಸಮಿತಿ ಸದಸ್ಯರಾದ ಪ್ರೊ. ಜಿ. ಅಬ್ದುಲ್ ಬಷೀರ್ ಮತ್ತು ಪ್ರೊ. ಅಶ್ವತ್ಥ್ ನಾರಾಯಣ ಶಾಸ್ತ್ರೀ (ನೈಷಧಂ) ಅವರು ಹಾಜರಿದ್ದರು.



# ಎಂ.ವಿ.ಸೀ.
# ಬದುಕು ಬರಹ – ೨೭

ಹಿಂದಿನ ಸಂಚಿಕೆಯಿಂದ

ಎರಡೂ ಮಕ್ಕಳ ನಾಮಕರಣ ಒಂದೇ ದಿನ ನಡೆಯುತ್ತದೆ: ಕುಮುದೆಯ ಆಸೆಯಂತೆ ಅವಳ ಗಂಡು ಮಗುವಿಗೆ 'ಸುಂದರ' ಎಂದು ಹೆಸರನ್ನೂ, ತನ್ನ ಹೆಣ್ಣ ಮಗುವಿಗೆ 'ಕುಮುದ' ಎಂದೂ ಹೆಸರಿಡುತ್ತಾರೆ. ಹೀಗೆ ತಾನು ಪ್ರೀತಿಸಿದ ಹುಡುಗಿಯ ಮಗುವನ್ನು ಸಾಕಿಕೊಳ್ಳುವುದರ ಮೂಲಕ ಸುಂದರ ಔದಾರ್ಯ ಮೆರೆಯುತ್ತಾನೆ. ಅದರೊಂದಿಗೆ ಜಾತಿಯ ಪ್ರಶ್ನೆಗೂ ಔದಾರ್ಯದ ವ್ಯಾಖ್ಯಾನ ಇಲ್ಲಿದೆ.

ದೇಶದ ವಿಭಜನೆಯ ಕಾಲದ ವಸ್ತುವುಳ್ಳ ಕತೆಗಳು ಭಾರತದ ಎಲ್ಲ ಭಾಷೆಗಳಲ್ಲೂ ನೂರಾರು ಬಂದಿವೆ. ಎಂವಿಸೀ ಅವರ 'ಮುರಿದ ಅಗಣಿ' ಈ ವಸ್ತುವುಳ್ಳ ಒಂದು ಕತೆ. ಆ ಸಂದರ್ಭದಲ್ಲಿ ನಡೆದ ಹಿಂದೂ–ಮುಸ್ಲಿಂ' ಗಲಭೆಗಳು ಭಯಾನಕವಾದವು; ಕರುಣೆಯಿರಬೇಕಾದ ಜಾಗದಲ್ಲಿ ಕ್ರೌರ್ಯ ಮೆರೆಯುವ ಸಂದರ್ಭ. ಗಲಭೆಯ ಮಧ್ಯೆ ಮಾನವೀಯತೆ, ಕ್ರೌರ್ಯದ ದಳ್ಳುರಿಯ ನಡುವೆ ಕರುಣೆ, ಪ್ರಲೋಭನೆಯ ನಡುವೆ ಸಂಯಮ – ಇವುಗಳು ಮೇಲುಗೈ ಪಡೆಯುವ ಸಂದರ್ಭಗಳನ್ನು ಕತೆಗಾರರು ಇಲ್ಲಿ ಸೃಷ್ಟಿಸಿದ್ದಾರೆ. ಈ ಕತೆ–ಯ ನಿರೂಪಕ ಅನಂತಯ್ಯ; ಒಬ್ಬ ಸರ್ಕಾರಿ ನೌಕರ. ದೇಶ ವಿಭಜನೆಯ ಕಾಲದಲ್ಲಿ ಬೆಂಗಳೂರಿನಲ್ಲೂ ಗಲಭೆಗಳ ಜರುಗಿದ ಸಂದರ್ಭ. ಗಲಭೆ ತೀವ್ರವಾದ ಪ್ರದೇಶದಲ್ಲಿ ಕರ್ಫ್ಯೂ ಜಾರಿಯಲ್ಲಿದ್ದಾಗ ಅನಂತಯ್ಯ ಕಚೇರಿಗೆ ಬಂದು ಹೋಗಲು ಆ ಪ್ರದೇಶದಲ್ಲೂ ಓಡಾಡಲು ಸರ್ಕಾರ ರಹದಾರಿ ಪತ್ರ ನೀಡಿತ್ತು. ಸಾಮಾನ್ಯವಾಗಿ ಕರ್ಫ್ಯೂ ಪ್ರದೇಶವನ್ನು ಬಳಸಿಕೊಂಡು ಓಡಾಡುವುದು ಪದ್ಧತಿ. ಆದರೆ ಒಮ್ಮೆ ತನ್ನ ಜಟಕಾದಲ್ಲಿ ಕುಳ್ಳಿರಿಸಿಕೊಂಡು ಕರ್ಫ್ಯೂ ಪ್ರದೇಶದ ನಡುವೆಯೇ ದಾವೂದ್ ಖಾನ್ ಎಂಬ ಮುದುಕ ಗಾಡಿ ಓಡಿಸುತ್ತಿದ್ದ. ಪೋಲೀಸರು ಮಧ್ಯೆ ತಡೆದರೂ ರಹದಾರಿ ಪತ್ರ ಕಂಡು ಗೊಣಗಿಕೊಂಡೇ ಹೋಗಬಿಟ್ಟರು. ಆದರೆ ಮುಂದೆ ಬಂದರೆ ಹಿಂದೂಗಳೇ ತುಂಬಿದ್ದ ಜಾಗವೊಂದರಲ್ಲಿ ಸಾಬಿಯ ಗಾಡಿ ಕಂಡು ಜನರ ಗುಂಪು ಕಲ್ಲುಗಳನ್ನು ಬೀರಲು ತೊಡಗಿತು.

ದಾವೂದ್ ಖಾನ್ ಗಾಡಿಯನ್ನು ದೌಡಾಯಿಸಿಕೊಂಡು ಬಂದು ಅನಂತಯ್ಯನನ್ನು ಮನೆಗೆ ಸುಖವಾಗಿ ತಂದು ಮುಟ್ಟಿಸಿದ್ದ. ಹೀಗೇ ಅವರಿಬ್ಬರ ಪರಿಚಯ ಬೆಳೆದಿತ್ತು. ಮುಂದೊಂದು ದಿನ ರಾತ್ರಿ, ಹತ್ತು ಗಂಟೆಯ ಸಮಯ, ಮನೆಯ ಮುಂದೆ ಜಟಕಾ ಬಂದು ನಿಂತ ಸದ್ದು, ಜೊತೆಗೆ ಅರೆಕ್ಷಣದಲ್ಲಿ 'ಸ್ವಾಮಿ' ಎಂಬ ಕೂಗು. ಹೋಗಿ ಬಾಗಿಲು ತೆರೆದರೆ ದಾವೂದ್ ಖಾನ್ ನಿಂತಿದ್ದಾನೆ, ಜೊತೆಗೆ ಒಬ್ಬ ಸುಂದರ ತರುಣಿ. ಅವಳ ಹೆಸರು ಬಾನೂ ಬೇಗಂ. ಮುದುಕ ಆ ಸಂದರ್ಭವನ್ನು ಹೀಗೆ ವಿವರಿಸಿದ: ತಾನು ಓಡಿಸುತ್ತಿದ್ದ ಗಾಡಿಯ ಮಾಲೀಕನ ಬಳಿ ಮತ್ತೊಂದು ಜಟಕಾ ಇತ್ತು. ಅದನ್ನು ಕೆಲವರ ಗುಂಪು ಸುಡುವ ಯತ್ನದಲ್ಲಿದ್ದಾಗ ಲೈಸನ್ಸ್ ಇದ್ದ ತನ್ನ ಬಂದೂಕಿನಿಂದ ಯಜಮಾನ ಗುಂಡು ಹಾರಿಸಿದನಂತೆ. ಆಗ ಗುಂಪು ಅವನ ಮನೆಯನ್ನೇ ಮುತ್ತಿತು. ಇದನ್ನು ದೂರದಿಂದ ಕಂಡ ದಾವೂದ್ ಪೋಲೀಸರಿಗೆ ಈ ಸುದ್ದಿ ಮುಟ್ಟಿಸಿದ್ದರಿಂದ, ಅವರು ಬಂದು ಜನ ಚದುರಿಸಿದರಂತೆ, ಮನೆಗೆ ಇಬ್ಬರು ಕಾನ್‌ಸ್ಟೇಬಲ್‌ಗಳು ನಿಯೋಜಿತರಾದರು. ಹುಡುಗಿಯ ರಕ್ಷಣೆಗೆಂದು ದಾವೂದ್ ಅವಳನ್ನು ಇಲ್ಲಿ ಒಂದು ರಾತ್ರಿ ಬಿಡಲು ಕರೆತಂದಿದ್ದ. ಅವಳಿಗೆ ರಕ್ಷಣೆ ಕೊಡಲು ಗಂಡ–ಹೆಂಡತಿ ಒಪ್ಪಿದಾಗ, ತನ್ನ ಮನೆಯಲ್ಲಿ ಹೆಂಡತಿ ಒಬ್ಬಳೇ ಇರುವಳೆಂದು ದಾವೂದ್ ಹೊರಟು ಹೋದ. ಮುರಿದ ಅಗುಣಿಯಿದ್ದ ಕೋಣೆಯೊಂದರಲ್ಲಿ ಹುಡುಗಿಗೆ ಮಲಗಲು ಸ್ಥಳ ಮಾಡಿಕೊಟ್ಟು ಅನಂತಯ್ಯ ಬಾಗಿಲು ಮುಂದಿಟ್ಟುಕೊಂಡು ಹೋದ. ಕೊಂಚ ಹೊತ್ತಾದ ಮೇಲೆ, ನಿಜವಾದ ಅನುಕಂಪವೋ ಹುಡುಗಿಯ ಚೆಲುವೋ, ಅವಳು ಊಟಮಾಡಿದ್ದಾಳೋ ಇಲ್ಲವೋ ಎಂದು ಒಂದು ಲೋಟ ಹಾಲು ತಂದು ಬಾನೂ ಬೇಗಂಗೆ ಕೊಡುತ್ತಾನೆ ಅನಂತಯ್ಯ. ತಾನು ದಾವೂದ್ ಖಾನನ ಮಗಳಲ್ಲವೆಂದೂ ಅವನ ಯಜಮಾನನ ಮಗಳೆಂದೂ, ತಾನೇನಾದರೂ ಆ ರಾತ್ರಿ ಮನೆಯಲ್ಲಿದ್ದಿದ್ದರೆ ಮತ್ತೆ ಗಲಭೆಯಾಗಿ ಪ್ರಾಣಹಾನಿಯಾಗುವುದೆಂಬ ಭಯದಿಂದ ತಂದೆ ಕಳುಹಿಸಿಕೊಟ್ಟಿರುವುದಾಗಿ ತಿಳಿಸಿ, ತನ್ನನ್ನು ಕಾಪಾಡಿದ್ದರಿಂದ ಕೃತಜ್ಞತೆ ತೋರಿಸಲು ಗಂಡನಿಲ್ಲದ ತಾನು ತನ್ನನ್ನು ಅನಂತಯ್ಯನಿಗೆ ಅರ್ಪಿಸಿಕೊಳ್ಳಲು ಮುಂದಾಗುತ್ತಾಳೆ. ಅವಳ ಚೆಲುವಿನಿಂದ ಆಕರ್ಷಿತನಾಗಿದ್ದರೂ 'ಪತ್ನಿ ದ್ರೋಹ'ದ ಅರಿವಿರುವ ಅನಂತಯ್ಯ ಅದನ್ನು ನಿರಾಕರಿಸಿ, ಮುರಿದ ಅಗುಣಿಯ ಕೋಣೆಗೆ ಹೊರಗೆ ಬೀಗ ಹಾಕಿ ಬೀಗದ ಕೈಯನ್ನು ಕಿಟಕಿಯಿಂದ ಕೋಣೆಯೊಳಕ್ಕೆಸೆದು ಬಂದು ಮಲಗುತ್ತಾನೆ.

ಪ್ರತಿಷ್ಠಾನದ ವಿಧ್ಯುಕ್ತ ಉದ್ಘಾಟನೆ ನಡೆದದ್ದು ೧೦–೩–೧೯೮೦ ರಂದು ಬೆಳಿಗ್ಗೆ ಗೋಖಲೆ ಸಾರ್ವಜನಿಕ ಸಂಸ್ಥೆಯ ಆವರಣದಲ್ಲಿ. ಬಿಎಂಶ್ರೀ ಅವರ ಭಾವಚಿತ್ರವನ್ನು ಅನಾವರಣಗೊಳಿಸುವ ಮೂಲಕ ಪ್ರತಿಷ್ಠಾನವನ್ನು ಉದ್ಘಾಟಿಸಲು ಬಂದಿದ್ದವರು ಕುವೆಂಪು. ಸಾಮಾನ್ಯವಾಗಿ ಅವರು ಮೈಸೂರು ಬಿಟ್ಟು ಬೇರೆಡೆ ಹೋದವರಲ್ಲ. ಅಂದು ಉದ್ಘಾಟನಾ ಭಾಷಣದಲ್ಲಿ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳು ಅನೇಕ ವಿಷಯಗಳ ಬಗ್ಗೆ ಬೆಳಕು ಚೆಲ್ಲುತ್ತದೆಯಾದ್ದರಿಂದ ಅವರ ಕೆಲವು ಮಾತುಗಳನ್ನಿಲ್ಲಿ ಉದ್ಧರಿಸಬಹುದು: "ಎಂದಿನಿಂದಲೂ ಸ್ಥಾವರ ಪ್ರಕೃತಿಯವನಾದ ನಾನು ಈ ಉದ್ಘಾಟನೆಯ ಕಾರ್ಯಕ್ಕೆ ತಕ್ಷಣ ಒಪ್ಪಿಕೊಳ್ಳಲಿಲ್ಲ. ನಿಟ್ಟೂರು ಶ್ರೀನಿವಾಸರಾಯರು ಪ್ರತಿಷ್ಠಾನದ ಉದ್ದೇಶಗಳನ್ನು ವಿವರಿಸಿ, ಅದರ ಸ್ಥಾಪಕರು ಎಂ.ವಿ. ಸೀತಾರಾಮಯ್ಯನವರು ಎಂದು ತಿಳಿಸಿದರು. ಸೀತಾರಾಮಯ್ಯನವರನ್ನು ನಾನು ವಿದ್ಯಾರ್ಥಿ ದೆಸೆಯಿಂದಲೂ ಬಲ್ಲೆ. ಅವರು ಅಧ್ಯಾಪಕ ವೃತ್ತಿಯಲ್ಲಿದ್ದಾಗ ಒಂದೆರಡು ಸಾರಿ ಪ್ರಾಸಂಗಿಕವಾಗಿ ಅವರು ನನ್ನನ್ನು ನೋಡಲು ಬಂದಿದ್ದಾಗ ಅವರ ದೇಹಸ್ಥಿತಿಯನ್ನು ನೋಡಿ ದಿಗಿಲುಬಿದ್ದಿದ್ದೆ. ಅವರನ್ನು ಆಗ ನೋಡಿದವರು ಇವರೇನು ಬಹಳ ದಿನ ಇರಲಾರರು ಅನ್ನುವ ಹಾಗೇ ಇದ್ದರು. ಅಂಥವರು, ಆ ಸುದಾಮನಂತಿರೋರು, ಈಗ, ಆ ಅಪರ ವಯಸ್ಸಿನಲ್ಲಿ ಈ ಭೀಮಕಾರ್ಯವನ್ನು ವಹಿಸಿಕೊಂಡು ಕೂತಿದ್ದಾರಲ್ಲ ಅಂತ ನನಗೆ ಸಂತೋಷ; ದಿಗಿಲು ಕೂಡ. ಆದರೂ ಅವರ ಶ್ರದ್ಧೆಯ ವಿಚಾರ ನನಗೆ ಚೆನ್ನಾಗಿ ಗೊತ್ತು. ಹಿಡಿದ ಕೆಲಸವನ್ನು ಮಾಡಲೇಬೇಕು ಅನ್ನುವ ದೃಢತೆಯೇ ಅವರನ್ನು ಅಳಿಲುತನದಿಂದ ಆಂಜನೇಯತನಕ್ಕೆ ಏರಿಸಿದೆ."

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮಾಸ್ತಿಯವರು ಬಿಎಂಶ್ರೀ ಅವರು ಕನ್ನಡ ನಾಡುನುಡಿಗಳಿಗೆ ಮಾಡಿದ ಸೇವೆಯನ್ನು ಉಲ್ಲೇಖಿಸಿ, "ಇಂಥ ಹಿರಿಯರ ಹೆಸರಿನಲ್ಲಿ ಸಂಶೋಧನೆ ಸಾಹಿತ್ಯ ವಿಮರ್ಶೆ ಮುಂತಾದ ಹಲವು ಬಗೆಯ ಸಾಹಿತ್ಯದ ಕೆಲಗಳನ್ನು ನಿರ್ವಹಿಸುವುದಕ್ಕಾಗಿ ಎಂವಿ. ಸೀತಾರಾಮಯ್ಯನವರು ಪ್ರತಿಷ್ಠಾನವನ್ನು ಸ್ಥಾಪನೆ ಮಾಡಿ ಅದನ್ನು ಅತ್ಯಂತ ಶ್ರದ್ಧೆಯಿಂದ ನಡೆಸಿಕೊಂಡು ಬರುತ್ತಾ ಇದ್ದಾರೆ" ಎಂದು ಎಂವಿಸೀ ಅವರ ಕಾರ್ಯಕೌಶಲವನ್ನು ಹೊಗಳಿದರು.

ಪುಟಕ್ಕೆ ೬ ಕ್ಕೆ



# ಪದಚರಿತೆ

**ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ**

– ಡಾ. ಪಿ.ವಿ. ನಾರಾಯಣ

**ಮೀನು:** ಇದೊಂದು ದ್ರಾವಿಡ ಪದ; ಪ್ರಮುಖವಾದ ದ್ರಾವಿಡ ಭಾಷೆಗಳಲ್ಲೆಲ್ಲ 'ಮೀನ್' ಎಂಬ ರೂಪವೇ ಇದೆ. ಇದೊಂದು ಜಲಚರ. ಇದು ದ್ರಾವಿಡ ಭಾಷಾ ವರ್ಗದಿಂದ ಸಂಸ್ಕೃತಕ್ಕೆ ಹೋದ ಒಂದು ಶಬ್ದವೆಂದು ಕಾಲ್ಡ್‌ವೆಲ್ ಅಭಿಪ್ರಾಯಪಡುತ್ತಾರೆ. 'ಮೀಂಗುಲಿ' ಅಥವಾ 'ಮೀಂಗುಲಿಗ' ಎಂದರೆ ಮೀನು ಹಿಡಿಯುವವನು, ಬೆಸ್ತ. ಮೀನ್+ಕುಲಿಗ (ಮೀನನ್ನು ಕೊಲ್ಲುವವನು, ಹಿಡಿಯುವವನು) "ಮೀಂಗುಲಿಗರ್ ಬಲೆಯಂ ತೆಗೆದು ನೋಡಿ" ಎಂಬುದು ದುರ್ಗಸಿಂಹನ 'ಪಂಚತಂತ್ರ'ದ ವಾಕ್ಯ. 'ಮೀಂಗುಲಿಗೆ' ಎಂದರೆ ಬೆಸ್ತ ಹೆಂಗಸು ("ವ್ಯಾಸನ ತಂದೆ ಮೀಂಗುಲಿಗೆಯೊಳ್" – ಬ್ರಹ್ಮಶಿವನ 'ಸಮಯ ಪರೀಕ್ಷೆ'). ಮೀನನ್ನು ತಿನ್ನುವ ಪಕ್ಷಿಯೇ 'ಮೀಂಗುಲಿಗವಕ್ಕಿ'. "ಮೀಂಗುಲಿಗವಕ್ಕಿ ಕೊಳದೊಳ್ ಮೀಂಗೆಱಗುವ ತೆಱದಿನೆಱಗಿ" ಎಂಬ ಮಾತು ರನ್ನನ 'ಗದಾಯುದ್ಧ'ದಲ್ಲಿ ಬರುತ್ತದೆ. 'ಮೀನಂಬುಱು' ಎಂಬ ಶಬ್ದವನ್ನು 'ಅನಂತನಾಥಪುರಾಣ'ದಲ್ಲಿ ಬಕಪಕ್ಷಿ ಎಂಬರ್ಥದಲ್ಲಿ ಬಳಸಲಾಗಿದೆ. 'ಮೀಂಚುಳ್ಳಿ' ಮೀನನ್ನು ಹಿಡಿದು ತಿನ್ನುವ ವಿಶಿಷ್ಟ ಹಕ್ಕಿಗೆ (ಕಿಂಗ್‌ಫ್ಲಿಶರ್) ಇರುವ ಹೆಸರು. ಮೀನಿನ ಮಾಂಸವನ್ನು 'ಸುಕುಮಾರ ಚರಿತೆ'ಯಲ್ಲಿ 'ಮೀಂಬೊಲಸು' ಎಂದಿದೆ ("ಮೀಂಬೊಲಸು ನಾರ್ಪ ಮೆಯ್ಗಂ"). ಮೀನನ್ನು ಹಿಡಿಯಲು ಬಳಸುವ ಸಾಧನವೇ 'ಮೀನ ಗಾಳ'. ಆಕರ್ಷಣೆಗೊಳಗಾಗು ಎಂಬರ್ಥದಲ್ಲಿ 'ಮೀನು ಗಾಳಕ್ಕೆ ಬಿತ್ತು' ಎಂಬ ನಾಣ್ಣುಡಿಯನ್ನು ಬಳಸುವುದ ರೂಢಿ.

ಮೀನ ಶಬ್ದವು ಸಂಸ್ಕೃತದಲ್ಲಿಯೂ ಬಳಕೆಯಲ್ಲಿದ್ದು ಬಹುತೇಕ ಸಮಾಸಗಳಲ್ಲಿ ಮಾತ್ರ ಬರುತ್ತದೆ. 'ಮೀನ' ಎಂಬುದು ದ್ವಾದಶ ರಾಶಿಗಳಲ್ಲೊಂದು. ಅನುಮಾನ ಪಡುವುದನ್ನು 'ಮೀನ ಮೇಷ ಎಣಿಸು' ಎನ್ನುತ್ತಾರೆ. ಮೀನಕೇತು ಎಂದರೆ ಮೀನಿನ ಗುರುತಿನ ಬಾವುಟ(ವುಳ್ಳವನು) ಎಂದರೆ ಮನ್ಮಥ. ("ಮೀನಕೇತುವೆತ್ತಿಸಿದ ಸಮುಲ್ಲಸ ಝುಷಪತಾಕೆ" – ಅಗ್ಗಳನ 'ಚಂದ್ರಪ್ರಭಪುರಾಣ'). ಮೀನಧ್ವಜ, ಮೀನಕೇತನ, ಮೀನಾಂಕ ಮುಂತಾದ ಶಬ್ದಗಳೆಲ್ಲ ಇದೇ ಅರ್ಥದವು. ಮೀನಿನಾಕಾರದ ಕಣ್ಣುಳ್ಳವಳು ಎಂಬರ್ಥದಲ್ಲಿ ಸುಂದರಿಯನ್ನು 'ಮೀನಾಕ್ಷಿ' 'ಮೀನಲೋಚನೆ' 'ಮೀನನೇತ್ರೆ' ಮುಂತಾದ ಶಬ್ದಗಳಿಂದ ಕವಿಗಳು ವರ್ಣಿಸುತ್ತಾರೆ.

=====

**ಮುತ್ತುಗ:** ಇದೊಂದು ಮರ; ಅಗಲವಾದ ಎಲೆಗಳಿಂದಲೂ ಕಡುಗೆಂಪು ಹೂಗಳಿಂದಲೂ ಕೂಡಿರುವುದು. ಇದು ದ್ರಾವಿಡ ಪದ: ಇದನ್ನು ಕನ್ನಡದಲ್ಲಿ ಮುತ್ತ, ಮುತ್ತಕ, ಮುತ್ತಲ, ಮುತ್ತಲು, ಮುತ್ತುಕ ಮುಂತಾದ ಹೆಸರುಗಳಿಂದಲೂ ಕರೆಯುವ ರೂಢಿಯಿದೆ. ತಮಿಳಿನಲ್ಲಿ ಈ ಮರವನ್ನು ಮರುಕ್ಕು ಎಂದೂ, ಮಲಯಾಳಂನಲ್ಲಿ ಮುರಿಕ್ಕು ಎಂದೂ, ತೆಲುಗಿನಲ್ಲಿ ಮೋದುಗ, ಮ್ರೋದುಗು, ಮೋದುವು ಎಂದೂ, ತುಳುವಿನಲ್ಲಿ ಮುತ್ತಕ ಎಂದೂ ಕರೆಯುತ್ತಾರೆ. ಸಂಸ್ಕೃತದಲ್ಲಿ ಈ ಮರವನ್ನು ಪಲಾಶ ಎಂದೂ ತಾಪಿಚ್ಛ ಎಂದೂ ಕರೆಯುತ್ತಾರೆ. "ಮುಟ್ಟಿಗಮೆಂದು ಒಂದು ಮರಂ" ಎಂದು 'ಶಬ್ದಮಣಿದರ್ಪಣ'ದಲ್ಲಿ ಹೇಳಿದ್ದರೆ, 'ಅಭಿಧಾನ ವಸ್ತುಕೋಶ'ದಲ್ಲಿ "ಪಲಾಶಮಾಖ್ಯಂ ಮುತ್ತಂ" ಎಂದಿದೆ. ಮುಳ್ಳುಗಳಿರುವ ಈ ಮರದ ಪ್ರಭೇದವೇ ಮುಳ್ಮುಟ್ಟಿಗ ಅಥವಾ ಮುಳ್ಮುತ್ತುಗ. "ಸುತ್ತಲುಂ ಪೂತ ಮುಳ್ಮುಟ್ಟಿಗದ ಮರಂಗಳೊಳಂ" ಎಂಬುದು 'ಕಬ್ಬಿಗರ ಕಾವ'ದ ಮಾತು.

ಆಗಲೇ ಹೇಳಿದಂತೆ ಈ ಮರದ ಹೂಗಳು ಕಡುಗೆಂಪಿನ ದೊಡ್ಡ ಗಾತ್ರದವು. ಇಂತಹ ಅಸಂಖ್ಯಾತ ಹೂಗಳು ಉದುರಿದ್ದುದನ್ನು ಕವಿ ಜನ್ನನು ತನ್ನ 'ಯಶೋಧರ ಚರಿತೆ'ಯಲ್ಲಿ [ಮಾರಿಬಲಿಯ ವರ್ಣನೆಯ ಹಿನ್ನೆಲೆಯಲ್ಲಿ] ವಸಂತನು ಶಿಶಿರನನ್ನು ಹಿಡಿದು "ಕಂಸುರಿದಜಿದಡಗಿನಂತೆವೊಲೆಸೆದುವು ತದ್ವನದೊಳುದಿರ್ದ ಮುತ್ತದ ಮುಗುಳ್ಗಳ್" ಎಂದು ವರ್ಣಿಸುತ್ತಾನೆ. ಮುತ್ತುಗದ ಹೂಗಳು ಕತ್ತರಿಸಿದ ಮಾಂಸದ ತುಂಡುಗಳಂತಿದ್ದುವಂತೆ.

ಈ ಮರದ ಎಲೆಗಳೂ ಅಗಲವಾಗಿರುತ್ತವೆ, ಮಂದವಾಗಿರುತ್ತವೆ, ಸಾಮಾನ್ಯವಾಗಿ ಮೂರೆಲೆಗಳು ಒಟ್ಟಿಗೇ ಇರುತ್ತವೆ, ಈ ಎಲೆಗಳನ್ನು ಒಣಗಿಸಿ ಬೇಕಾದಾಗ ನೀರಲ್ಲದ್ದಿ ಮೃದು ಮಾಡಿಕೊಂಡು ಹಂಚಿಕಡ್ಡಿಯಿಂದ ಹಚ್ಚಿ ದೊಡ್ಡದಾದ ಊಟದೆಲೆಗಳನ್ನು ಮಾಡುವ ರೂಢಿಯಿದೆ. ಈ ಎಲೆಗಳನ್ನು ಇಸ್ತ್ರೆಲೆಗಳೆಂದೂ ಕರೆಯುತ್ತಾರೆ [ಇಸ್ತ್ರ+ಎಲೆ]. ತೆಲುಗಿನಲ್ಲಿ 'ಇಸ್ತ್ರಾಕು' ಎಂಬ ಶಬ್ದವಿದೆ. ಇಸ್ತ್ರ ಎಂಬುದು ವಿಸ್ತರ ಎಂಬ ಸಂಸ್ಕೃತ ಪದದ ವ್ಯತ್ಯಸ್ತ ರೂಪವಿರಬಹುದು ಎಂದು ಊಹಿಸಲಾಗಿದೆ. ಮುಂಜಿಯ ಕಾಲದಲ್ಲಿ ವಟುವು ಮುತ್ತುಗದ ರೆಂಬೆಯನ್ನು ಹಿಡಿದುಕೊಳ್ಳುವ ಸಂಪ್ರದಾಯವಿದೆ.

=====

ಪುಟ ೫ ರಿಂದ

೧೯೮೪ ಬಿಎಂಶ್ರೀ ಅವರ ಜನ್ಮಶತಾಬ್ದಿಯ ವರ್ಷ. ಅವರು ಹುಟ್ಟಿದುದು ೧೮೮೪ ರ ಜನವರಿ ಮೂರರಂದು. ಹೀಗಾಗಿ ೧೮೮೩ ರ ಜನವರಿ ಮೂರರಿಂದ ಒಂದು ವರ್ಷ ಕಾಲ ಬಿಎಂಶ್ರೀ ಶತಮಾನೋತ್ಸವವನ್ನು ಆಚರಿಸಲು ಬಿಎಂಶ್ರೀ ಪ್ರತಿಷ್ಠಾನ ನಿರ್ಧರಿಸಿತು. ಅದರ ಮುಖ್ಯ ಸಮಾರಂಭ ನಡೆದುದು ಬೆಂಗಳೂರಿನಲ್ಲಲ್ಲ, ಬಿಎಂಶ್ರೀ ಅವರ ಸ್ವಂತ ಊರಾದ ಬೆಳ್ಳೂರಿನಲ್ಲಿ. ಸಣ್ಣ ಊರಾದರೂ ಅಲ್ಲಿನ ಆದಿಚುಂಚನಗಿರಿ ಮಠದ ಸಹಕಾರದಿಂದ ಸಮಾರಂಭ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಅಲ್ಲದೆ, ಎಂವಿಸೀ ಸರ್ಕಾರಿ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗ ಅವರ ವಿದ್ಯಾರ್ಥಿಗಳಗಿದ್ದವರು ಹಲವರು ಉನ್ನತ ಹುದ್ದೆಗಳಲ್ಲಿಯೂ ರಾಜಕೀಯದಲ್ಲಿಯೂ ಇದ್ದುದರಿಂದ ಅವರೆಲ್ಲರ ಸಹಾಯದಿಂದ ಈ ಕಾರ್ಯಕ್ರಮ ಹಮ್ಮಿಕೊಳ್ಳಲು ಸಾಧ್ಯವಾಯಿತು. ಶತಮಾನೋತ್ಸವವನ್ನು ಒಂದು ಸಮಾರಂಭಕ್ಕೆ ಸೀಮಿತಗೊಳಿಸದೆ ಎಂವಿಸೀ ಬೇರೆ ಬೇರೆ ಊರುಗಳಲ್ಲಿಯೂ ಅಲ್ಲಿನ ಸಂಘಸಂಸ್ಥೆಗಳ ಸಹಕಾರದೊಂದಿಗೆ ಬಿಎಂಶ್ರೀ ಪ್ರತಿಷ್ಠಾನದ ಮೂಲಕ ಎಂವಿಸೀ ಕಾರ್ಯಕ್ರಮಗಳನ್ನು ಆಯೋಜಿಸಿದರು. ತಮ್ಮ ಆರೋಗ್ಯದ ಸೂಕ್ಷ್ಮ ಸ್ಥಿತಿಯಲ್ಲಿಯೂ ಅವರು ಮುಂಬೈ ನಾಗಪುರ ದೆಹಲಿ ಮುಂತಾದ ದೂರದ ಊರುಗಳಲ್ಲಿ ಕಾರ್ಯಕ್ರಮಗಳನ್ನು ನಡೆಸಲು ನೆರವಾಗಿ, ಪ್ರತಿಷ್ಠಾನದ ಒಂದಿಬ್ಬರು ಪದಾಧಿಕಾರಿಗಳೊಡನೆ ಆ ಊರುಗಳಿಗೆಲ್ಲ ಹೋಗಿ ಕಾರ್ಯಕ್ರಮಗಳ ಯಶಸ್ಸಿಗೆ ಕಾರಣರಾದರು. ಬೆಂಗಳೂರಿನಲ್ಲಿ ಪ್ರತಿಷ್ಠಾನದ ಸ್ವಂತ ಭವನವಾಗುವುದಕ್ಕೆ ಮುಂಚೆಯೇ, ಬಿಎಂಶ್ರೀ ಅವರು ಹುಟ್ಟಿದ ತಾಯಿಯ ತವರೂರು ಸಂಪಿಗೆ ಹಾಗೂ ಅವರ ಹಿರಿಯರ ಬೆಳ್ಳೂರುಗಳಲ್ಲಿ ನಿವೇಶನಗಳನ್ನು ದಾನವಾಗಿ ಪಡೆದು, ಸ್ಥಳೀಯ ಸಂಸ್ಥೆಗಳು ಹಾಗೂ ಸರ್ಕಾರದ ನೆರವಿನೊಂದಿಗೆ ಬಿಎಂಶ್ರೀ ಭವನಗಳ ನಿರ್ಮಾಣಕ್ಕೆ ಕಾರಣರಾದರು. ಅವುಗಳು ಈಗಲೂ ಕಾರ್ಯ ನಿರ್ವಹಿಸುತ್ತಿವೆ.

– ಮುಂದುವರೆಯುವುದು




# ಪತ್ರಿಕಾ ನೆನಪು






ಸಾಹಿತಿ ಅಗ್ರಹಾರ ಕೃಷ್ಣಮೂರ್ತಿ ಅಭಿಮತ

## ‘ಆತ್ಮ ಕಥನಕ್ಕೆ ನೆನಪಿನ ನಿಧಿ ಬೇಕು’



ಸೂ.ವೆಂ.ಅರಗ ವಿಮರ್ಶಾ ಪ್ರಶಸ್ತಿ ಮತ್ತು ಡಾ.ವಿ
ಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿ ಪ್ರದಾನ: ಪ್ರಶಸ್ತಿ
ಪ್ರದಾನ- ಅಗ್ರಹಾರ ಕೃಷ್ಣಮೂರ್ತಿ, ಆಯೋಜನೆ
ಬಿ.ಎಂ.ಶ್ರೀ.ಪ್ರತಿಷ್ಠಾನ, ಸ್ಥಳ-ಎಂ.ವಿ.ಸೀ.ಸಭಾಂಗಣ
ಬಿ.ಎಂ.ಶ್ರೀ.ಕಲಾಭವನ, ಎನ್.ಆರ್.ಕಾಲೊನಿ-ಸಂ



**ಬಿಎಂಶ್ರೀ ಪ್ರತಿಷ್ಠಾನ :** ಸು.ವೆಂ. ಅರಗ ವಿಮರ್ಶಾ ಪ್ರಶಸ್ತಿ ಹಾಗೂ ಡಾ.ವಿಜಯಾ ಸುಬ್ಬರಾಜ್ ಗಣ್ಯ ಲೇಖಕಿ ಪ್ರಶಸ್ತಿ ಪ್ರದಾನ. ಸ್ಥಳ: ಎಂ.ವಿ.ಸೀ. ಸಭಾಂಗಣ. ಬಿ.ಎಂ.ಶ್ರೀ ಕಲಾಭವನ, ಎನ್.ಆರ್ ಕಾಲೊನಿ. ಸಂಜೆ 5.



» **ಪ್ರಶಸ್ತಿ ಪ್ರದಾನ:** ಬಿಎಂಶ್ರೀ ಪ್ರತಿಷ್ಠಾನ ಆಯೋಜನೆ. ಸೂ.ವೆಂ. ಅರಗ ವಿಮರ್ಶಾ ಪ್ರಶಸ್ತಿ ಮತ್ತು ಡಾ.ವಿಜಯಾ ಸುಬ್ಬರಾವ್ ಗಣ್ಯಲೇಖಕಿ ಪ್ರಶಸ್ತಿ ಪ್ರದಾನ. ಪುರಸ್ಕೃತರು: ಕಥೆಗಾರ ಕೆ. ಸತ್ಯನಾರಾಯಣ, ವಿರ್ಮಶಕಿ ಡಾ.ಶಾಂತಾ ಇಮ್ರಾಪುರ. ಪ್ರದಾನ: ಸಾಹಿತಿ ಅಗ್ರಹಾರ ಕೃಷ್ಣಮೂರ್ತಿ. ಅಧ್ಯಕ್ಷತೆ: ಡಾ.ಬೈರಮಂಗಲ ರಾಮೇಗೌಡ. ಸ್ಥಳ: ಎಂವಿಸೀ ಸಭಾಂಗಣ, ಬಿಎಂಶ್ರೀ ಕಲಾಭವನ, ಬಸವನಗುಡಿ. ಸಂಜೆ 5ಕ್ಕೆ.



**ಶ್ರೀ ವೈಯಾಕರಣಿ ಗರಣಿ ಕೃಷ್ಣಾಚಾರ್ಯ ದತ್ತಿ ಉಪನ್ಯಾಸ:** ಶಂಕರ ಮೊಕಾಶಿ ಪುಣೇಕರ ಬಗ್ಗೆ ಉಪನ್ಯಾಸ- ಬಿ.ಎಂ.ಶ್ರೀ. ಪ್ರತಿಷ್ಠಾನದ ಹಸ್ತಪ್ರತಿ ಸಂಯೋಜನಾಧಿಕಾರಿ ಬಿ.ಎಸ್. ಗುರುಪ್ರಸಾದ್, ಅಧ್ಯಕ್ಷತೆ- ಡಾ. ಬೈರಮಂಗಲ ರಾಮೇಗೌಡ, ಆಯೋಜನೆ- ಬಿ.ಎಂ.ಶ್ರೀ. ಪ್ರತಿಷ್ಠಾನ, ಸ್ಥಳ- ಎಂ.ವಿ.ಸೀ. ಸಭಾಂಗಣ, ಬಿ.ಎಂ. ಶ್ರೀ ಕಲಾಭವನ, ಸಂಜೆ 5



## ಪಿಎಚ್‌ಡಿಗೆ ಅರ್ಜಿ ಆಹ್ವಾನ

ಬೆಂಗಳೂರು: ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತಾ ಕೇಂದ್ರಗಳಲ್ಲಿ ಒಂದಾಗಿರುವ ಬಿಎಂಶ್ರೀ ಪ್ರತಿಷ್ಠಾನದಲ್ಲಿ ಪಿಎಚ್.ಡಿ ಅಧ್ಯಯನ ಮಾಡಲು ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿದೆ.

ಪ್ರತಿಷ್ಠಾನದಲ್ಲಿ 7 ಸೀಟುಗಳು ಲಭ್ಯವಿದ್ದು, ಪ್ರವೇಶ ಪಡೆಯಲು ಇಚ್ಛಿಸುವವರು ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಬಹುದು ಎಂದು ಪ್ರಕಟಣೆ ತಿಳಿಸಿದೆ.

ವಿಳಾಸ: ಬಿಎಂಶ್ರೀ ಪ್ರತಿಷ್ಠಾನ, ಎನ್.ಆರ್.ಕಾಲೊನಿ, ಬೆಂಗಳೂರು.

ಸಂಪರ್ಕ: 9972812127



» **ಉಪನ್ಯಾಸ:** ಬಿಎಂಶ್ರೀ ಪ್ರತಿಷ್ಠಾನ ಆಯೋಜನೆ. ಶ್ರೀ ವೈಯಾಕರಣಿ ಗರಣಿ ಕೃಷ್ಣಾಚಾರ್ಯ ದತ್ತಿ ಉಪನ್ಯಾಸ: ಬಿ.ಎಸ್. ಗುರುಪ್ರಸಾದ್. ವಿಷಯ: ಶಂಕರ ಮೊಕಾಶಿ ಪುಣೇಕರ. ಅಧ್ಯಕ್ಷತೆ: ಸಾಹಿತಿ ಬೈರಮಂಗಲ ರಾಮೇಗೌಡ. ಸ್ಥಳ: ಎಂವಿಸೀ ಸಭಾಂಗಣ, ಬಿಎಂಶ್ರೀ ಕಲಾಭವನ, ನರಸಿಂಹ ರಾಜ ಕಾಲನಿ. ಸಂಜೆ 4ಕ್ಕೆ.

# ಹಸ್ತಪ್ರತಿ ವಿಭಾಗದ ವರದಿ



೧. ಶ್ರೀ ಉಮೇಶ ಶಿರೂರು, ನಿವೃತ್ತ ಅಧಿಕಾರಿ, ಬಿ.ಎಸ್.ಎನ್.ಎಲ್. ಇವರು ತಮ್ಮ ಸ್ವಂತ ಆಸಕ್ತಿಯ ಮೇರೆಗೆ, ಹಸ್ತಪ್ರತಿ ಸಂರಕ್ಷಣೆ ಮತ್ತು ತಾಳೆವೋಲೆಗಳನ್ನು ಓದಿ ಸೂಚಿ ತಯಾರು ಮಾಡುವುದನ್ನು ಕಲಿಯಲು ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ಕಳೆದ ಒಂದು ತಿಂಗಳಿನಿಂದಲೂ ತರಬೇತಿ ಪಡೆಯುವ ಸಲುವಾಗಿ ಬರುತ್ತಿದ್ದಾರೆ. ಈಗಾಗಲೇ ಇವರು ತಮ್ಮ ತಂದೆಯವರಾದ ಶಿರೂರು ಫಣಿಯಪ್ಪಯ್ಯ ಯಕ್ಷಗಾನದ ಪ್ರಸಂಗಗಳನ್ನು ಓದಿ, ಡಿಟಿಪಿ ಮಾಡಿ ಪ್ರಕಟಿಸಿದ್ದಾರೆ.

೨. ವಿಶ್ವ ಪಾರಂಪರಿಕ ದಿನಾಚರಣೆಯ ಅಂಗವಾಗಿ ಕೆ.ಎಲ್.ಇ. ಸೊಸೈಟಿ ಲಾ ಕಾಲೇಜು,ವಿಶ್ವೇಶ್ವರಯ್ಯ ಬಡಾವಣೆ, ಉಲ್ಲಾಳ, ಬೆಂಗಳೂರು ಇವರು ತಮ್ಮ ಕಾಲೇಜಿನಲ್ಲಿ ಹೆರಿಟೇಜ್ ಕ್ಲಬ್ ಅನ್ನು ಪ್ರಾರಂಭಿಸುವ ಸದುದ್ದೇಶದಿಂದ ಕ್ಲಬ್ಬಿನ ಉದ್ಘಾಟನೆಯನ್ನು ಮತ್ತು ಮೂರು ದಿನಗಳ ಕಾರ್ಯಾಗಾರವನ್ನು ಹಮ್ಮಿಕೊಂಡಿದ್ದರು. ಪುರಾತತ್ವೀಯ ಮತ್ತು ಇತರ ಪೂರಕ ಪಾರಂಪರಿಕ ವಸ್ತು ಪ್ರದರ್ಶನವನ್ನು ದಿನಾಂಕ ೧೮.೪.೨೦೨೨ ರಿಂದ ೨೦.೪.೨೦೨೨ರವರೆಗೆ ಕಾಲೇಜಿನ ಆವರಣದಲ್ಲಿ ಏರ್ಪಡಿಸಿದ್ದರು. ಕಾಲೇಜಿನ ಕೋರಿಕೆಯಂತೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ವಿವಿಧ ಲಿಪಿಗಳ ತಾಳೆಗರಿ ಪ್ರದರ್ಶನ, ದಕ್ಷಿಣ ಭಾರತದ ವಿವಿಧ ಲಿಪಿಗಳ ಉಗಮ, ವಿಕಾಸ ಮತ್ತು ಬೆಳವಣಿಗೆಗಳನ್ನು ಬಿಂಬಿಸುವ ಲಿಪಿ ಪಟ್ಟಿಕೆಗಳನ್ನು (Charts), ತಾಮ್ರಪಟಗಳನ್ನು ಮತ್ತು ಬರೆಯುವ ಸಾಧನಗಳನ್ನು ಪ್ರದರ್ಶನಕ್ಕೆ ಏರ್ಪಡಿಸಿತ್ತು. ಇದೇ ಸಂದರ್ಭದಲ್ಲಿ ಹಸ್ತಪ್ರತಿ ಸಂಯೋಜನಾಧಿಕಾರಿ ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಹಸ್ತಪ್ರತಿಗಳ ಸಂಗ್ರಹ ಮತ್ತು ಸಂರಕ್ಷಣಾ ವಿಧಾನಗಳನ್ನು ಪ್ರಾತ್ಯಕ್ಷಿಕೆಯೊಂದಿಗೆ ವಿವರಿಸಿದರು. ಹಸ್ತಪ್ರತಿಗಳ ಇತಿಹಾಸ ಮತ್ತು ಭಾರತದಲ್ಲಿ ದೊರೆಯುತ್ತಿದ್ದ ವಿವಿಧ ಲೇಖ್ಯವಸ್ತುಗಳು ಮತ್ತು ಲೇಖನಿಗಳ ಬಗ್ಗೆ ಉಪನ್ಯಾಸವನ್ನೂ ನೀಡಿದರು.

೩. ಬಿ.ಎಂ.ಶ್ರೀ. ಪ್ರತಿಷ್ಠಾನದ ಅಮೂಲ್ಯವಾದ ಸಂಗ್ರಹವೆಂದರೆ ತಾಳೆಗರಿ ಗ್ರಂಥಗಳು, ಕಾಗದದ ಹಸ್ತಪ್ರತಿ ಮತ್ತು ಗ್ರಂಥಾಲಯದಲ್ಲಿರುವ ಗ್ರಂಥ ಭಂಡಾರ. ಅವುಗಳಲ್ಲಿರುವ ವಿದ್ವತ್ತನ್ನು ಮುಕ್ತವಾಗಿ ಆಸಕ್ತರೆಲ್ಲರೂ ಉಪಯೋಗಿಸುವ ಸಲುವಾಗಿ ಗ್ರಂಥಗಳ ಸ್ಕ್ಯಾನಿಂಗ್ ವ್ಯವಸ್ಥೆಯನ್ನು ಮಾಡಿಕೊಡಲು ಶ್ರೀ ಅಜಿತ್ ಗರ್ಗೇಶ್ವರಿ ಮತ್ತು ಮಯ್ಯ, ಶ್ರೀ ಜಯಪ್ರಕಾಶ್ ಹೆಗಡೆ ಇವರುಗಳು ಸ್ವಯಂಪ್ರೇರಿತರಾಗಿ ಮುಂದೆ ಬಂದಿದ್ದು, ಸ್ಕ್ಯಾನಿಂಗ್ ವ್ಯವಸ್ಥೆಯನ್ನು ಪ್ರಾರಂಭ ಮಾಡಿರುತ್ತಾರೆ. ಮುಂಬರುವ ದಿನಗಳಲ್ಲಿ, ಪ್ರತಿಷ್ಠಾನದ ವೆಬ್‌ಸೈಟ್‌ನಲ್ಲಿ ಸ್ಕ್ಯಾನ್ ಮಾಡಿರುವ ಗ್ರಂಥಗಳನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳುವ ರೀತಿ, ಸೂಚನೆಗಳ ಬಗ್ಗೆ ಮಾಹಿತಿ ನೀಡಲಾಗುತ್ತದೆ. ಸದ್ಯಕ್ಕೆ ಗ್ರಂಥಗಳ ಸಂಗ್ರಹಣಾ ಕಾರ್ಯಕ್ಕೆ ಆದ್ಯತೆ ನೀಡಲಾಗುವುದು.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2021-2023
dt. 28-12-2020
Office of Posting: Bangalore PSO, Bangalore 560026
Price : Annual Subscription Rs. 20/-
Date of publishing and Posting : 30-05-2022



**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ......................................................................................

..............................................................................................................

..............................................................................................................

ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭